## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 717
ಸದಸ್ಯರ ಹೆಸರು : ಶ್ರೀ ಆರ್.ಬಿ.ತಿಮ್ಮಾಪುರ
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಲಾಕ್‌ಡೌನ್ ಸಂದರ್ಭದಲ್ಲಿ ವಲಸೆ ಕಾರ್ಮಿಕರನ್ನು ಅವರ ಊರಿಗೆ ಕಳುಹಿಸಲು ಸರ್ಕಾರವು ಯಾವ ಯೋಜನೆಯನ್ನು ಹಮ್ಮಿಕೊಂಡಿದೆ; | ಲಾಕ್‌ಡೌನ್ ಸಂದರ್ಭದಲ್ಲಿ ವಲಸೆ ಕಾರ್ಮಿಕರನ್ನು ಬೆಂಗಳೂರು ಹಾಗೂ ವಿವಿಧ ಸ್ಥಳಗಳಿಂದ ಅವರ ಊರಿಗೆ ಕಳುಹಿಸಲು ಬಸ್ಸಿನ ವ್ಯವಸ್ಥೆ ಕಲ್ಪಿಸಲಾಗಿರುತ್ತದೆ.<br>ಮುಂದುವರೆದು, ಭಾರತೀಯ ರೈಲ್ವೆಯು ವಲಸಿಗ ಕಾರ್ಮಿಕರು ಹಾಗೂ ಪರಸ್ಥಳಗಳಲ್ಲಿ ಸಿಲುಕಿಕೊಂಡಿರುವ ಇತರೆ ಪ್ರಯಾಣಿಕರಿಗೆ, ಅವರುಗಳ ಊರುಗಳನ್ನು ತಲುಪಲು ಅನುಕೂಲವಾಗುವಂತೆ "ಶ್ರಮಿಕ ವಿಶೇಷ ರೈಲುಗಳ" ಸೇವೆಗಳನ್ನು ಆರಂಭಿಸಿದ್ದರ ಹಿನ್ನೆಲೆಯಲ್ಲಿ, ವಿವಿಧ ರಾಜ್ಯಗಳ ವಲಸಿಗ ಕಾರ್ಮಿಕರಿಗೆ ಅವರುಗಳ ವಾಸಸ್ಥಳ/ಪರಿಹಾರ ಕೇಂದ್ರದಿಂದ ರೈಲು ನಿಲ್ದಾಣಗಳಿಗೆ ತಲುಪಿಸಲು ವಿಶೇಷ ಸಾರಿಗೆ ಸೇವೆಯನ್ನು ಒದಗಿಸಲಾಗಿರುತ್ತದೆ.<br>ಈ.ಕ.ರ.ಸಾ.ಸಂಸ್ಥೆಯ 29 ಬಸ್ಸುಗಳಲ್ಲಿ 855 ಶ್ರಮಿಕ ಕಾರ್ಮಿಕರನ್ನು ಮಹಾರಾಷ್ಟ್ರ ರಾಜ್ಯದಿಂದ ಕರೆ ತರಲಾಗಿದೆ. |
| ಆ. | ಸರ್ಕಾರವು ಉಚಿತ ಪ್ರಯಾಣಕ್ಕೆ ವ್ಯವಸ್ಥೆಯನ್ನು ಮಾಡಲಾಗಿತ್ತೇ ಅಥವಾ ನಿರ್ದಿಷ್ಟವಾದ ದರವನ್ನು ಏನಾದರೂ ನಿಗದಿ ಮಾಡಲಾಗಿದೆಯೇ; | **ಕ.ರಾ.ರ.ಸಾ.ನಿಗಮದಿಂದ** ದಿನಾಂಕ: 01.05.2020ರಂದು ವಲಸೆ ಕಾರ್ಮಿಕರಿಗೆ ಸಾಂದರ್ಭಿಕ ಒಪ್ಪಂದದ ದರಗಳನ್ನು ನಿಗದಿಪಡಿಸಿ ಸಾರಿಗೆ ಸೌಲಭ್ಯ ಒದಗಿಸಲಾಗಿದೆ. ದಿನಾಂಕ: 02.05.2020ರಂದು ಒಂದು ಮಾರ್ಗದ ದರಗಳನ್ನು ಪಡೆದು ಸಾರಿಗೆ ಸೌಲಭ್ಯ ಒದಗಿಸಿದ್ದು, ದಿನಾಂಕ: 03.05.2020ರಿಂದ ಉಚಿತವಾಗಿ ಸಾರಿಗೆ ವ್ಯವಸ್ಥೆಯನ್ನು ಒದಗಿಸಿರುತ್ತದೆ.<br>**ವಾ.ಕ.ರ.ಸಾ.ಸಂಸ್ಥೆಯಿಂದ** ವಲಸೆ ಕಾರ್ಮಿಕರಿಗೆ ಉಚಿತವಾಗಿ ಸಾರಿಗೆ ವ್ಯವಸ್ಥೆ ಕಲ್ಪಿಸಲಾಗಿದೆ.<br>**ಈ.ಕ.ರ.ಸಾ.ಸಂಸ್ಥೆಯಿಂದ** ವಲಸೆ ಕಾರ್ಮಿಕರಿಗೆ ದಿನಾಂಕ 02-05-2020ರಂದು ಕರಾರು ಒಪ್ಪಂದ ಹಾಗೂ ವೇಗದೂತ ಪ್ರಯಾಣ ದರ ಆಕರಣೆ ಮಾಡಲಾಗಿರುತ್ತದೆ. ದಿನಾಂಕ 03-05-2020ರಿಂದ ಉಚಿತ ಪ್ರಯಾಣ ಸೌಲಭ್ಯ ಕಲ್ಪಿಸಲಾಗಿದೆ. |
| ಇ. | ದುಪ್ಪಟ್ಟು ದರ ನಿಗದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | |

...2

| | | |
|---|---|---|
| | | ಬೆಂ.ಮ.ಸಾ.ಸಂಸ್ಥೆಯಿಂದ ದಿನಾಂಕ: 03-05-2020ರಿಂದ 22-05-2020ರವರೆಗೆ ವಲಸಿಗ ಕಾರ್ಮಿಕರಿಗೆ ಒದಗಿಸಿರುವ ವಿಶೇಷ ಸಾರಿಗೆಗಳಿಗೆ ಪ್ರತಿ ಕಾರ್ಮಿಕರಿಗೆ ರೂ.140/- ದರವನ್ನು ನಿಗದಿಪಡಿಸಲಾಗಿತ್ತು. ರೈಲುಗಳನ್ನು ನಗರದ ಹೊರವಲಯದಲ್ಲಿನ ರೈಲು ನಿಲ್ದಾಣಗಳಿಂದ ಕಾರ್ಯಾಚರಿಸಲಾಗಿರುತ್ತದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: RD 399 PRS 2020, ದಿನಾಂಕ: 23-05-2020ರನ್ವಯ ವಲಸಿಗ ಕಾರ್ಮಿಕರಿಗೆ ದಿನಾಂಕ: 23-05-2020ರಿಂದ ಉಚಿತವಾಗಿ ವಿಶೇಷ ಸಾರಿಗೆ ಸೇವೆಗಳನ್ನು ಒದಗಿಸಲಾಗಿದೆ. |

ಸಂಖ್ಯೆ: ಟಿಡಿ 165 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು